## ಕರ್ನಾಟಕ ವಿಧಾನ ಪರಿಷತ್ತು

1 ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 253+202

2 ಸದಸ್ಯರುಗಳ ಹೆಸರು : 1) ಶ್ರೀ ಸಲೀಂ ಅಹಮದ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
2) ಶ್ರೀ ಯು.ಬಿ. ವೆಂಕಟೇಶ್
(ನಾಮ ನಿರ್ದೇಶನ ಹೊಂದಿದವರು)

3 ಉತ್ತರಿಸುವ ದಿನಾಂಕ : 17-02-2022

4 ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಹೈಕೋರ್ಟ್ ಸೂಚನೆಯ ಹೊರತಾಗಿಯೂ ನಗರದಲ್ಲಿನ ರಸ್ತೆಗಳಲ್ಲಿ ಅನೇಕ ದಿನಗಳಿಂದ ಗುಂಡಿಗಳು ಹಾಗೆಯೇ ಉಳಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ಸೂಚನೆಯ ಹೊರತಾಗಿಯೂ, ನಗರದಲ್ಲಿನ ರಸ್ತೆಗಳಲ್ಲಿ ಅನೇಕ ದಿನಗಳಿಂದ ಗುಂಡಿಗಳು ಉಳಿದಿರುವುದಕ್ಕೆ ಕಾರಣವಾಗಿರುವ ಪ್ರಮುಖ ಅಂಶಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ | ಈ ರಸ್ತೆ ಗುಂಡಿಗಳಿಂದ ವಾಹನ ಸವಾರರಿಗೆ ಅನಾನುಕೂಲವಾಗಿ ಅನೇಕ ಅಪಘಾತಗಳಾಗಿ ಜನರು ಮರಣ ಹೊಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಇ | ಇತ್ತೀಚಿನ ದಿನಗಳಲ್ಲಿ ಈ ಗುಂಡಿಗೆ ಬಿದ್ದು ಶಾಲಾ ಶಿಕ್ಷಕಿ ಸಾವಿಗೀಡಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಕಳೆದ 5 ವರ್ಷಗಳಿಂದ ರಸ್ತೆ ಗುಂಡಿಗಳಿಂದ ಮೃತ ಗೊಂಡಿರುವವರ ಸಂಖ್ಯೆ ಎಷ್ಟು; (ಹೆಸರು ವಿಳಾಸದೊಂದಿಗೆ ಸಂಪೂರ್ಣ ಮಾಹಿತಿ ನೀಡುವುದು) | ದಿನಾಂಕ: 30.01.2022 ರಂದು ಮಾಗಡಿ ಮುಖ್ಯರಸ್ತೆಯ ಅಂಜನಾನಗರ ಬಸ್ ನಿಲ್ದಾಣದ ಬಳಿ, ಕೆ.ಎ-02 ಎ.ಜಿ-2504 ಮಹೇಂದ್ರ ಬೊಲೊರೋ ವಾಹನವನ್ನು ಅಜಾಗರೂಕತೆಯಿಂದ ಚಾಲನೆ ಮಾಡಿ, ಶಾಲಾ ಶಿಕ್ಷಕಿ ಹಿಂಬದಿಯ ಸವಾರರಾಗಿ ಪ್ರಯಾಣಿಸುತ್ತಿದ್ದ ದ್ವಿಚಕ್ರ ವಾಹನಕ್ಕೆ ಡಿಕ್ಕಿ ಹೊಡೆದ ಪರಿಮಾಣವಾಗಿ ಮೃತಪಟ್ಟಿರುತ್ತಾರೆಂದು ಬ್ಯಾಡರಹಳ್ಳಿ ಪೊಲೀಸ್ ಠಾಣೆಯಲ್ಲಿ ಅಪರಾಧ ಸಂಖ್ಯೆ: 0049/2022 ರಂತೆ ದಿನಾಂಕ:30.01.2022 ರಂದು ಪ್ರಥಮ ವರ್ತಮಾನ ವರದಿ ದಾಖಲಾಗಿರುತ್ತದೆ. ಪ್ರಥಮ ವರ್ತಮಾನ ವರದಿ **(FIR)** ಪ್ರತಿಯನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ.<br><br>ಸದರಿ ರಸ್ತೆಯಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಿಂದ ರಸ್ತೆ ಗುಂಡಿಗಳನ್ನು ಮುಚ್ಚಲಾಗಿರುತ್ತದೆ. ಆದರೆ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಿಂದ 110 ಹಳ್ಳಿಗಳಿಗೆ ಕುಡಿಯುವ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಗಾಗಿ ರಸ್ತೆಯ |

| | | |
|---|---|---|
| | | ಭಾಗವನ್ನು ಕತ್ತರಿಸಿದ್ದು, ಸದರಿ ರಸ್ತೆ ಕತ್ತರಿಸಿದ ಭಾಗವನ್ನೇ ರಸ್ತೆ ಗುಂಡಿಯೆಂದು ದಿನಪತ್ರಿಕೆ/ಮಾಧ್ಯಮದಲ್ಲಿ ಪ್ರಕಟಿಸಲಾಗಿರುತ್ತದೆ.<br><br>ಕಳೆದ 5 ವರ್ಷಗಳಲ್ಲಿ ರಸ್ತೆ ಗುಂಡಿಗಳಿಂದ ಮೃತಪಟ್ಟಿರುವವರ ಹೆಸರು, ವಿಳಾಸ ಮತ್ತು ಇತರೆ ವಿವರಗಳನ್ನು **ಅನುಬಂಧ-3** ರಲ್ಲಿ ನೀಡಲಾಗಿದೆ. |
| ಈ | ಈ ರೀತಿ ಮೃತ ವ್ಯಕ್ತಿಗಳಿಗೆ ಯಾವ ರೀತಿ ಪರಿಹಾರವನ್ನು ನೀಡಲಾಗಿದೆ; (ಸಂಪೂರ್ಣ ವಿವರವನ್ನು ನೀಡುವುದು) | ಪಾಲಿಕೆ ವ್ಯಾಪ್ತಿಯಲ್ಲಿನ ರಸ್ತೆಗಳಲ್ಲಿ ಉಂಟಾಗುವ ರಸ್ತೆಗುಂಡಿಗಳಿಂದ ಸಂಭವಿಸುವ ಅಪಘಾತಗಳ ಪ್ರಕರಣಗಳಲ್ಲಿ ಸಾರ್ವಜನಿಕರಿಗೆ ಪರಿಹಾರ ನೀಡುವ ಬಗ್ಗೆ ದಿನಾಂಕ: 01.12.2020 ರಂದು ಸಾರ್ವಜನಿಕ ಪ್ರಕಟಣೆ ಹೊರಡಿಸಲಾಗಿದ್ದು, ದಿನಾಂಕ: 02.12.2020 ರಂದು ಪ್ರಮುಖ ಕನ್ನಡ ಮತ್ತು ಆಂಗ್ಲ ಭಾಷೆ ದಿನಪತ್ರಿಕೆಗಳಲ್ಲಿ ಪ್ರಚುರ ಪಡಿಸಲಾಗಿರುತ್ತದೆ. ಸದರಿ ಮಾಹಿತಿಯನ್ನು **ಅನುಬಂಧ-4 ಮತ್ತು 4(ಎ)** ರಲ್ಲಿ ನೀಡಲಾಗಿದೆ.<br><br>ಮೃತ ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಪರಿಹಾರ ಕೋರಿ ಅವರ ಕುಟುಂಬದ ಅವಲಂಬಿತರಿಂದ ಪಾಲಿಕೆಗೆ ಇದುವರೆವಿಗೂ ಅರ್ಜಿಗಳು ಸ್ವೀಕೃತವಾಗಿರುವುದಿಲ್ಲ. ಅರ್ಜಿಗಳು ಸ್ವೀಕೃತವಾದಲ್ಲಿ ತಕ್ಷಣ ಪರಿಹಾರ ನೀಡಲು ಪಾಲಿಕೆ ವತಿಯಿಂದ ಅಗತ್ಯ ಕ್ರಮ ಕೈಗೊಳ್ಳಲಾಗುತ್ತದೆ. |
| | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿನ ರಸ್ತೆಗಳಲ್ಲಿ ಗುಂಡಿ ಮುಚ್ಚಲು ಪ್ರತಿ ವರ್ಷ ಖರ್ಚಾಗುತ್ತಿರುವ ಮೊತ್ತವೆಷ್ಟು; ಈ ಗುಂಡಿಗಳನ್ನು ಮುಚ್ಚಿಸಲು ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು? | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿನ ರಸ್ತೆಗಳಲ್ಲಿ ಉಂಟಾಗುವ ರಸ್ತೆಗುಂಡಿ ಮತ್ತು ಹಾಳಾದ ರಸ್ತೆ ಮೇಲ್ಮೈ ದುರಸ್ಥಿಗೆ ಕಳೆದ 5 ವರ್ಷಗಳಲ್ಲಿ ಖರ್ಚಾಗಿರುವ ಮೊತ್ತದ ವಿವರವನ್ನು **ಅನುಬಂಧ-5** ರಲ್ಲಿ ನೀಡಲಾಗಿದೆ.<br><br>ಬಿಬಿಎಂಪಿ ವ್ಯಾಪ್ತಿಯಲ್ಲಿರುವ ರಸ್ತೆಗಳನ್ನು ಸುಸ್ಥಿತಿಯಲ್ಲಿಡಲು ಪಾಲಿಕೆಯ ವತಿಯಿಂದ ಕೈಗೊಂಡಿರುವ ಕ್ರಮಗಳನ್ನು **ಅನುಬಂಧ-6** ರಲ್ಲಿ ನೀಡಲಾಗಿದೆ. |

**ಸಂಖ್ಯೆ: ನಅಇ 52 ಎಂಎಸ್‌ವೈ 2022 (ಇ)**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

## ಅನುಬಂಧ-1

- ಬೆಂಗಳೂರು ನಗರವು ಐತಿಹಾಸಿಕ ಹಿನ್ನೆಲೆಯುಳ್ಳ ಮತ್ತು ಈ ಹಿಂದೆ ನಿವೃತ್ತ ವಾಸಿಗಳ ಪ್ರಮುಖ ಆಕರ್ಷಣೀಯ ನಗರವಾಗಿ ರೂಪುಗೊಂಡು, ಅಂದಿನ ಜನಸಂಖ್ಯೆ / ವಾಹನ ಸಾಂದ್ರತೆಗೆ ಅನುಗುಣವಾಗಿ ರಸ್ತೆಗಳನ್ನು ರೂಪಿಸಿ / ನಿರ್ಮಿಸಿಕೊಂಡಿದ್ದು, ತದನಂತರದಲ್ಲಿ ಬೃಹತ್ ವೇಗವಾಗಿ ಬೆಳವಣಿಗೆಗೊಂಡು ಅತೀ ಹೆಚ್ಚಿನ ಜನ ಸಾಂದ್ರತೆಯ / ವಾಹನ ದಟ್ಟಣೆಯ ನಗರವಾಗಿ ಪರಿವರ್ತನೆಗೊಂಡಿರುತ್ತದೆ.
- ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಬಹುತೇಕ ಹೆಚ್ಚಿನ ರಸ್ತೆಗಳು ಕಿರಿದಾಗಿರುವುದಲ್ಲದೇ, ಕೇವಲ ರಸ್ತೆಯ ಜಾಗವಾಗಿ ವಾಹನ ಸಂಚಾರಕ್ಕೆ ಮಾತ್ರವೇ ಉಪಯೋಗಿಸದೇ, ಹಲವಾರು ಮೂಲಭೂತ ಸೌಕರ್ಯ ಸೇವೆ ಸಂಸ್ಥೆಗಳು ವಿವಿಧ ರೀತಿಯ ಅನುಸಾಧನಗಳನ್ನು ಅಳವಡಿಸಿ ಸಾರ್ವಜನಿಕರ ಉಪಯೋಗಕ್ಕೆ ಸಂಪರ್ಕ ನೀಡಲು ಸಹಾ ಬಳಸಲಾಗುತ್ತಿರುತ್ತದೆ.
- ನಗರದ ಹಲವಾರು ಪ್ರಮುಖ ರಸ್ತೆಗಳನ್ನು ಕಾಲಕಾಲಕ್ಕೆ / ಅವಶ್ಯಕತೆಗೆ ಅನುಗುಣವಾಗಿ ಅಗಲೀಕರಣ ಮಾಡಿರುವುದರಿಂದ, ಈ ಹಿಂದೆ ವಿವಿಧ ಇಲಾಖೆಗಳು ಅಳವಡಿಸಿದ್ದ ವಿವಿಧ ಮಾದರಿಯ ಅನುಸಾಧನಗಳು ಶಿಥಿಲಗೊಂಡು ಆಗಾಗ್ಗೆ ಹಾಳಾಗುತ್ತಿರುವುದರಿಂದ.
- ಪಾಲಿಕೆ ವ್ಯಾಪ್ತಿಯಲ್ಲಿನ ಹಾಲಿ ಇರುವ ಪ್ರಮುಖ ಮತ್ತು ಸಂಪರ್ಕ ರಸ್ತೆಗಳಲ್ಲಿ, ಸದರಿ ರಸ್ತೆಗಳ ಅಗಲಕ್ಕೆ ಅನುಗುಣವಾಗಿ ಸಂಚರಿಸಬೇಕಾಗಿರುವ ವಾಹನಗಳ ಸಾಮರ್ಥ್ಯಕಿಂತ 4 ಪಟ್ಟು ಹೆಚ್ಚಿನ ಸಾಂದ್ರತೆಯ ವಾಹನಗಳು ಸಂಚರಿಸುತ್ತಿರುವುದರಿಂದ, ರಸ್ತೆಗಳಲ್ಲಿ ಸಂಚಾರ ನಿರ್ಬಂಧಿಸಿ ಅಭಿವೃದ್ಧಿ ಕಾಮಗಾರಿ ಕೈಗೊಳ್ಳಲು ಅವಕಾಶವಿಲ್ಲದೆ ಇರುವುದರಿಂದ ಹಂತ ಹಂತವಾಗಿ ಮತ್ತು ಕೆಲವೊಂದು ಬಾರಿ ಒಂದು ಬದಿಯ ಭಾಗಶಃ ಪ್ರದೇಶಗಳಲ್ಲಿ ಕಾಮಗಾರಿ ಕೈಗೊಳ್ಳಬೇಕಾಗಿರುವುದರಿಂದ.
- ಬೆಸ್ಕಾಂ/ಕೆ.ಪಿ.ಟಿ.ಸಿ.ಎಲ್ ಸಂಸ್ಥೆಗಳಿಗೆ ಸಂಬಂಧಪಟ್ಟ ವಿದ್ಯುತ್ ಕೇಬಲ್ / ಕಂಬ / ಟ್ರಾನ್ಸ್‌ಫಾರ್ಮರ್ / ಆರ್.ಎಂ.ಯು ಇತ್ಯಾದಿಗಳ ಸ್ಥಳಾಂತರ ಮತ್ತು ಹೊಸದಾಗಿ ಅಳವಡಿಸುವುದರಿಂದ.
- ಬೆಂಗಳೂರು ಜಲ ಮಂಡಳಿಗೆ ಸಂಬಂಧಪಟ್ಟ ನೀರು ಸರಬರಾಜು ಮತ್ತು ಒಳಚರಂಡಿ ಕೊಳವೆಗಳ ಸ್ಥಳಾಂತರ ಮತ್ತು ಹೊಸದಾಗಿ ಅಳವಡಿಸುವುದರಿಂದ.
- ಓ.ಎಫ್.ಸಿ ಸಂಬಂಧಿತ ಹಾಗೂ ಇತರೆ ಕೇಬಲ್/ಕೊಳವೆಗಳ ಸ್ಥಳಾಂತರ ಅಥವಾ ಸ್ಥಳಾಂತರ ಮತ್ತು ಹೊಸದಾಗಿ ಅಳವಡಿಸುವುದರಿಂದ.
- ಯೋಜನೆ ಸ್ಥಳಗಳಲ್ಲಿ ಅಡ್ಡಲಾಗಿರುವ ಮರಗಳ ತೆರವುಗೊಳಿಸುವ ಬಗ್ಗೆ ಉಂಟಾಗುವ ವಿಳಂಬ / ವಿರೋಧ / ಅಡಚಣೆಗಳಿಂದಾಗಿ.
- 2021ನೇ ಸಾಲಿನ ಅಕಾಲಿಕ ಮತ್ತು ಸತತವಾಗಿ ಬಿದ್ದಂತಹ ಹೆಚ್ಚಿನ ಪ್ರಮಾಣದ ಮಳೆಯಿಂದಾಗಿ.
- ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ 110 ಹಳ್ಳಿಗಳ ಪ್ರದೇಶಗಳಲ್ಲಿ ನೀರು ಸರಬರಾಜು ಮತ್ತು ಒಳಚರಂಡಿ ಕೊಳವೆ ಅಳವಡಿಸುವ ಮಹತ್ವದ ಮತ್ತು ಪ್ರಮುಖ ಯೋಜನೆಯನ್ನು ಕೈಗೊಂಡು ಅನುಷ್ಠಾನ ಗೊಳಿಸುತ್ತಿದ್ದು, ಪ್ರಮುಖವಾಗಿ ಪಾಲಿಕೆಯ ಹೊರ ವಲಯಗಳಲ್ಲಿನ ಬಹುತೇಕ ರಸ್ತೆಗಳನ್ನು ಕೊಳವೆ ಅಳವಡಿಸಲು ಕತ್ತರಿಸುತ್ತಿರುವುದರಿಂದ.

* * * * *

" ಅನುಬಂಧ-2 "

ಕರ್ನಾಟಕ ರಾಜ್ಯ ಪೊಲೀಸ್

ಪ್ರಥಮ ವರ್ತಮಾನ ವರದಿ

(ದಂಡಪ್ರಕ್ರಿಯ ಸಂಹಿತೆ ಕಲಂ 154 ರ ಕೆಳಗೆ )

ಘನ ನ್ಯಾಯಾಲಯ : Chief Judicial Magistrate (CJM) Bangalore Rural Di,Bangalore Rural District, Bangalore

1. ಜಿಲ್ಲೆ : Bengaluru City ವೃತ್ತ/ಉಪ ವಿಭಾಗ : Vijayanagar Sub-Division ಪೊಲೀಸ್ ಠಾಣೆ : Byadarahalli PS

ಅಪರಾಧ ಸಂಖ್ಯೆ : 0049/2022 ಪ್ರ.ವ.ವ.ದಿನಾಂಕ : 30/01/2022

2. ಕಾಯ್ದೆ ಮತ್ತು ಕಲಂಗಳು : IPC 1860 (U/s-304A,279,337)

3. (a) ಕೃತ್ಯ ನಡೆದ ದಿನ : Sunday ದಿನಾಂಕ ದಿಂದ : 30/01/2022 ದಿನಾಂಕ ವರೆಗೆ : 30/01/2022

ವೇಳೆಯಿಂದ : 10:00:00 ವೇಳೆಯವರೆಗೆ : 10:45:00

(b) ಠಾಣೆಯಲ್ಲಿ ವರ್ತಮಾನ ಸ್ವೀಕರಿಸಿದ ದಿನಾಂಕ : 30/01/2022 12:00:00 ಬರವಣಿಗೆಯಲ್ಲಿ / ಹೇಳಿಕೆ : Written

(c) ಪಿರ್ಯಾದುದಾರ / ಬಾತ್ಮೀದಾರ ತಡವಾಗಿ ವರದಿ ಮಾಡಿದಕ್ಕೆ ಕಾರಣಗಳು :

(d) ಜನರಲ್ ಡೈರಿ ಉಲ್ಲೇಖ ಸಂಖ್ಯೆ ಮತ್ತು ಸಮಯ : 1 , 12:00:00

4. (a) ಕೃತ್ಯ ನಡೆದ ಸ್ಥಳ :

Near Anjananagara Bus Stop,, Magadi Main Road, Anjananagara, Bengaluru City, Karnataka, 560091

(b) ಪೊಲೀಸ್ ಠಾಣೆ ಯಿಂದ ಇರುವ ದಿಕ್ಕು ಮತ್ತು ದೂರ : Towards North 1km From PS

(c) ಗ್ರಾಮ : Anjananagar ಗಸ್ತಿನ ಹೆಸರು : Beat No 6

(d) ಸ್ಥಳವು ಬೇರೆ ಪೊಲೀಸ್ ಠಾಣೆ ವ್ಯಾಪ್ತಿಗೆ ಬರುವಂತಹದ್ದು ಆದರೆ ಆ ಪೊಲೀಸ್ ಠಾಣೆಯ ಹೆಸರು :

ಜಿಲ್ಲೆ :

5. ಪಿರ್ಯಾದುದಾರ/ಬಾತ್ಮೀದಾರ :

(a) ಹೆಸರು : Prajwal ತಂದೆ / ಗಂಡನ ಹೆಸರು : Prakash I G

(b) ವಯಸ್ಸು : 19 (c) ವೃತ್ತಿ : Student

(d) ಧರ್ಮ : Hindu (e) ಜಾತಿ : KURUBA

(f) ಫ್ಯಾಕ್ಸ್ : (g) ಇ-ಮೇಲ್ :

(h) ದೂರವಾಣಿ : 7204434719 (i) ರಾಷ್ಟ್ರೀಯತೆ : India

(j) ಪಾಸ್ ಪೋರ್ಟ್ ಸಂಖ್ಯೆ : ನೀಡಿದ ದಿನಾಂಕ :

(k) ವಿಳಾಸ : No-03, Pategarapalya Main Road, Kempanna Garden, Munikrishnappa Layout Bengaluru City Karnataka

(l) ಲಿಂಗ : Male

(m) ಫಿರ್ಯಾದುದಾರ ಖುದ್ದಾಗಿ ನೋಡಿದ್ದರೆ ಅಥವಾ ಕೇಳಿಸಿಕೊಂಡಿದ್

6. ಗೊತ್ತಿರುವ / ಅನುಮಾನಿತ/ಅಪರಿಚಿತ ವ್ಯಕ್ತಿಯ ಪೂರ್ತಿ ವಿವರಗಳು

| Sl.No. | ಹೆಸರು / ತಂದೆಯ ಹೆಸರು / ಜಾತಿ / ವಿಳಾಸ | ವಿಧ | ವ್ಯಕ್ತಿಯ ವಿಧ | ಲಿಂಗ | ವಯಸ್ಸು | ವೃತ್ತಿ |
|---|---|---|---|---|---|---|
| 1 | Madesh(A1) NABengaluru City, Karnataka | Accused | Common man | Male | | |

7. ನೊಂದವರ ವಿವರಗಳು

| Sl. No | ಹೆಸರು | ವಿಳಾಸ | ಗಾಯದ ವಿಧ | ಲಿಂಗ | ವಯಸ್ಸು | ವೃತ್ತಿ |
|---|---|---|---|---|---|---|
| 1 | Sharmila Narona | No-03, Pategarapalya Main Road, Kempanna Garden,, Munikrishnappa Layout Bengaluru City, Karnataka | Fatal | Female | 46 years | |
| 2 | Prakash I G | No-03, Pategarapalya Main Road, Kempanna Garden,, Munikrishnappa Layout Bengaluru City, Karnataka | Minor | Male | 48 years | Others Pl Specify |

8. ಕಳುವಾಗಿರುವ / ಬಾಗಿಯಾಗಿರುವ ಸ್ವತ್ತುಗಳ ವಿವರಗಳು

| Sl.No | Property Type | Item description | Estimated Value (in Rs.) |
|---|---|---|---|
| 1 | | | |

ಕಳುವಾಗಿರುವ / ಬಾಗಿಯಾಗಿರುವ ಸ್ವತ್ತುಗಳ ಮೌಲ್ಯ :

9. ಪಂಚನಾಮ ವರದಿ / ಯು.ಡಿ. ಕೇಸ್. ಸಂಖ್ಯೆ

10. ಪ್ರಥಮ ವರ್ತಮಾನ ವರದಿಯ ವಿವರಗಳು

ಪಿರ್ಯಾದುದಾರರಾದ ಪ್ರಜ್ವಲ್ ರವರು ಠಾಣೆಗೆ ಬಂದು ನೀಡಿರುವ ದೂರಿನ ಸಾರಾಂಶ ಏನೆಂದರೆ ನಾನು ಮೇಲ್ಕಂಡ ವಿಳಾಸದಲ್ಲಿ ತಂದೆತಾಯಿಯೊಂದಿಗೆ ವಾಸವಾಗಿದ್ದು, ಇಂಜಿನೀಯರ್ ವ್ಯಾಸಂಗ ಮಾಡುತ್ತಿರುತ್ತೇನೆ. ಈ ದಿನ ದಿನಾಂಕ:-30.01.2022 ರಂದು ಬೆಳಿಗ್ಗೆ ಸುಮಾರು 10-00 ಗಂಟೆಯ ಸಮಯದಲ್ಲಿ ನಮ್ಮ ತಂದೆ ಶ್ರೀ.ಪ್ರಕಾಶ್ ಐ.ಜಿ 48 ವರ್ಷ, ಮತ್ತು ನಮ್ಮ ತಾಯಿ ಶ್ರೀಮತಿ ಶರ್ಮಿಳಾ ನರೋನಾ 46 ವರ್ಷ, ಇಬ್ಬರು ನಮ್ಮ ದ್ವಿಚಕ್ರ ವಾಹನ ನಂ-ಕೆಎ-02-ಇಇ-3498 ಹಿರೋಹೊಂಡಾ ಸ್ಪ್ಲೆಂಡರ್ ಪ್ಲಸ್.ರಲ್ಲಿ ಮಾದನಾಯಕನಹಳ್ಳಿಯಲ್ಲಿರುವ ನಮ್ಮ ಸಂಬಂಧಿಕರ ಮನೆಗೆ ಹೊರಟ್ಟಿದ್ದರು. ನಂತರ ಬೆಳಿಗ್ಗೆ ಸುಮಾರು 10-45 ಗಂಟೆಯ ಸಮಯದಲ್ಲಿ ನಮ್ಮ ಪರಿಚಿತರೊಬ್ಬರು ಫೋನ್ ಮಾಡಿ ಮಾಗಡಿ ಮುಖ್ಯರಸ್ತೆಯ, ಅಂಜನಾ ನಗರ ಬಸ್ ನಿಲ್ದಾಣದ ಬಳಿ ನಿಮ್ಮ ತಂದೆತಾಯಿ ಹೋಗುತ್ತಿದ್ದ ದ್ವಿಚಕ್ರ ವಾಹನಕ್ಕೆ ನಂ-ಕೆಎ-02-ಎಜಿ-2504 ಮಹೇಂದ್ರ ಬುಲೇರೋ ವಾಹನವು ಡಿಕ್ಕಿ ಮಾಡಿ ನಿಮ್ಮ ತಾಯಿ ಸ್ಥಳದಲ್ಲಿಯೇ ಮೃತಪಟ್ಟಿದ್ದು. ನಿಮ್ಮ ತಂದೆಯವರಿಗೆ ಕೈಕಾಲುಗಳಿಗೆ ಗಾಯವಾಗಿದ್ದು, ಚಿಕಿತ್ಸೆಗಾಗಿ ಆಸ್ಪತ್ರೆಗೆ ದಾಖಲಿಸಿರುತ್ತೇವೆಂದು ತಿಳಿಸಿದ ಮೇರೆಗೆ ಕೂಡಲೇ ನಾನು ಅಂಜನಾ ನಗರ ಬಸ್ ನಿಲ್ದಾಣದ ಬಳಿ ಬಂದು ನೋಡಲಾಗಿ ನಮ್ಮ ತಾಯಿಯವರ ತಲೆಗೆ ತೀವ್ರತರದ ರಕ್ತಗಾಯವಾಗಿ ಮೃತಪಟ್ಟಿದ್ದು, ನಮ್ಮ ತಂದೆಯವರ ಕೈಕಾಲುಗಳಿಗೆ ರಕ್ತ ಗಾಯವಾಗಿ ಅನುಪಮ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿರುತ್ತಾರೆ. ಆದ್ದರಿಂದ ನಂ-ಕೆಎ-02-ಎಜಿ-2504 ಮಹೇಂದ್ರ ಬುಲೇರೋ ವಾಹನದ ಚಾಲಕನು ಅಜಾಗರುಕತೆಯಿಂದ ಬುಲೇರೋ ವಾಹನವನ್ನು ಚಾಲನೆ ಮಾಡಿಕೊಂಡು ಬಂದು ಮುಂದೆ ಹೋಗುತ್ತಿದ್ದ ನಮ್ಮ ತಂದೆತಾಯಿಯ ದ್ವಿಚಕ್ರ ವಾಹನಕ್ಕೆ ಟಚ್ ಮಾಡಿದ್ದು, ಇದರಿಂದ ನಮ್ಮ ತಾಯಿಯು ಕೆಳಗೆ ಬಿದ್ದಿದ್ದು ಅವರ ತಲೆಗೆ ಬುಲೇರೋ ವಾಹನದ ಹಿಂಬದಿಯ ಟೈರ್ ಹರಿದು ಮೃತಪಟ್ಟಿದ್ದು, ನಮ್ಮ ತಂದೆಯವರ ಕೈಕಾಲುಗಳಿಗೆ ರಕ್ತವಾಗಿರುತ್ತದೆ. ಆದ್ದರಿಂದ ನಂ-ಕೆಎ-02-ಎಜಿ-2504 ಮಹೇಂದ್ರ ಬುಲೇರೋ ವಾಹನದ ಚಾಲಕ ಮಹೇಶ್ ಎಂಬುವರ ವಿರುದ್ಧ ಕಾನೂನು ರೀತಿಯಾ ಕ್ರಮ ಜರುಗಿಸಬೇಕೆಂದು ಕೊಟ್ಟ ದೂರು ಇತ್ಯಾದಿ.

11. (a) ತೆಗೆದುಕೊಂಡ ಕ್ರಮ:

Investigation

(b) ಪ್ರ.ವ.ವರದಿಯನ್ನು ಪಿರ್ಯಾದಿಯವರಿಗೆ ಅವರದೆ ಭಾಷೆಯಲ್ಲಿ ವಿವರಿಸಿ, ಓದಿ ಹೇಳಲಾಗಿದೆ

ಅದರ ಪ್ರತಿಯನ್ನು ಪುಕಟ್ಟೆಯಾಗಿ ಕೊಡಲಾಗಿದೆ? : Yes

(c) ಪೊಲೀಸ್ ಅಧಿಕಾರಿಯು ತನಿಖೆಗೆ ಸ್ಥಳಕ್ಕೆ ಧಾವಿಸದಿದ್ದಲ್ಲಿ ಅಥವಾ ತನಿಖೆ ಮಾಡಲು ನಿರಾಕರಿಸಿದಲ್ಲಿ ಕಲಂ 157 ಸಿ.ಆರ್.ಪಿ.ಸಿ ಯ ಕಲಂ (ಎ)ಅಥವಾ (ಬಿ)ಯಡಿ ಕಾರಣವನ್ನು ದಾಖಲಿಸಬೇಕು.

PROCEED

12. ಪಿರ್ಯಾದಿಯ ಸಹಿ/ ಹೆಬ್ಬೆರಳಿನ ಗುರುತು

13. ನ್ಯಾಯಾಲಯಕ್ಕೆ ಕಳುಹಿಸಿದ ದಿನಾಂಕ ಮತ್ತು ಸಮಯ : 30/01/2022 13:00:00

14. ನ್ಯಾಯಾಲಯಕ್ಕೆ ತೆಗೆದುಕೊಂಡು ಹೋದ ಪಿಸಿ/ ಹೆಚ್.ಸಿ : SURESH G , HC 7923

ಓದಿ ಹೇಳಲಾಗಿ ಕೇಳಲಾಗಿ ಸರಿಯಾದೆ

ಠಾಣಾಧಿಕಾರಿಯ ಸಹಿ

ಹೆಸರು: NAVEEN PRASAD V - PSI

ಪ್ರತಿಗಳು : Superintendent of Police/Commissioner of Police
DCP WEST
ACP VIJAYANAGARA
COURT COPY
CASE FILE COPY
COMPLANENT COPY

# ಅನುಬಂಧ - 3

**2017 ರಿಂದ 2022 (31/01/2022 ರವರೆಗೆ ರಸ್ತೆ ಗುಂಡಿಗಳಿಂದ ಅಪಘಾತಕ್ಕೊಳಗಾಗಿ ಮೃತಪಟ್ಟಿರುವವರ ವಿವರ**

| ಕ್ರಮ ಸಂಖ್ಯೆ | ಸಂಚಾರ ಪಿ.ಎಸ್. | ಮೊ.ಸಂ. ಮತ್ತು ದಿನಾಂಕ | ಫಿರ್ಯಾದಾರರ ಹೆಸರು ಮತ್ತು ವಿಳಾಸ | ಮೃತರ ಹೆಸರು ಮತ್ತು ವಿಳಾಸ | ಆರೋಪಿತರ ಹೆಸರು ಮತ್ತು ವಿಳಾಸ |
|---|---|---|---|---|---|
| 1 | ಚಿಕ್ಕಪೇಟೆ | ಮೊ.ಸಂ:355/2017 ಕಲಂ.279-337-304 (ಎ) ಐಪಿಸಿ. ರೆ/ವಿ 134(ಎ&ಬಿ)ಐಎಂವಿ ಆಕ್ಟ್, ದಿನಾಂಕ-03-10-2017 ರಂದು ಬೆಳಗಿನ ಜಾವ 1.45 ಸಮಯ, ರಿಂದ 2.00 ಗಂಟೆಯ ಸಮಯದಲ್ಲಿ. | ಶ್ರೀ ಇಗ್ನೇಷಿಯಸ್ ದೀಪಕ್ ಬಿನ್ ಅಂಥೋಣಿ ಜೋಸೆಫ್, ಸು:26 ವರ್ಷ, ವಾಸ ನಂ-44, 1ನೇ ಕ್ರಾಸ್, ರಾಯಪುರಂ, ಜೆ.ಜೆ.ಆರ್‌ನಗರ ಬೆಂಗಳೂರು-18 | 1)ಆಂಥೋಣಿ ಜೋಸೆಫ್ ವಯಸ್ಸು ಸುಮಾರು 55 ವರ್ಷ, ವಾಸ ನಂಬರ್-44, 1ನೇ ಕ್ರಾಸ್, ರಾಯಪುರಂ, ಜೆಜೆಆರ್ ನಗರ, ಬೆಂಗಳೂರು-56018 2)ಸಗಾಯ್ ಮೇರಿ ವಯಸ್ಸು ಸುಮಾರು 52 ವರ್ಷ ವಾಸ ನಂಬರ್-44, 1ನೇ ಕ್ರಾಸ್, ರಾಯಪುರಂ, ಜೆಜೆಆರ್ ನಗರ, ಬೆಂಗಳೂರು-56018 | ಸೆಲ್ವಂ ಎಸ್ ಬಿನ್ ಸಂಗರಾಂ ಸುಮಾರು 42 ವರ್ಷ, ಬಿಲ್ಲೆ ಸಂಖ್ಯೆ ಡಿಆರ್-7308, ವಾಸ ವೆಪ್ಪಾಳಂಪಟ್ಟಿ ಗ್ರಾಮ, ಕ ಪೋಸ್ಟ್, ಉತ್ತಂಕರೈ ತಾಲ್ಲೋಕು, ಕೃಷ್ಣಗಿರಿ ಜಿಲ್ಲೆ, ತಮಿಳುನಾಡು ರಾಜ್ಯ (ತಮಿಳುನಾಡು ಸಾರಿಗೆ ಸಂಸ್ಥೆ ಟಿ.ಎನ್-29-ಎನ್-2540 ರ ಚಾಲಕ ] |
| 2 | ಯಲಹಂಕ ಸಂಚಾರ | 160/2018 ಕಲಂ.304(ಎ) | ಶ್ರೀಮತಿ ಪದ್ಮ ಗಂಡ ಗಂಗಾಧರ 42 ವರ್ಷ #176, ಮಂಜುನಾಥ ಬೀಲ್ಡಿಂಗ್, ದೊಡ್ಡಬೆಟ್ಟಹಳ್ಳಿ, ಯಲಹಂಕ-560064 | ಗಂಗಾಧರ #176, ಮಂಜುನಾಥ ಬೀಲ್ಡಿಂಗ್, ದೊಡ್ಡಬೆಟ್ಟಹಳ್ಳಿ, ಯಲಹಂಕ-560064 | ಎ-01-ವರ್ಗಿಸ್ ಇ.ಎಸ್ ಬಿನ್ ಸ್ಕೇರಿಯಾ #143, ರತ್ನಾ ಬೀಲ್ಡಿಂಗ್, 04ನೇ ಮಹಡಿ ರೀಚ್ಮಂಡ್ ರಸ್ತೆ ಬೆಂಗಳೂರು ನಗರ<br><br>ಎ-02-ಕಣ್ಣನ್ ಗೋಪಿನಾಥನ ಎಸ್, ಬಿನ್ ಶೀನಿ #209, ಎ ಬ್ಲಾಕ್, ಸರೋಜ್ ಲೇಔಟ್, ಬೆನ್ ಸತ್ಯಾ ಎನ್‌ಕ್ಲೇವ್, ಹೆಣ್ಣೂರು ಮುಖ್ಯ ರಸ್ತೆ ಬೆಂಗಳೂರು ನಗರ |
| 3 | ವೈಟ್‌ಫೀಲ್ಡ್ ಸಂ | 70/2020, ಕಲಂ 279, 304(ಎ) ಐಪಿಸಿ, ಕಲಂ 134(ಎ) & (ಬಿ) ಸಹಿತ 187 ಐಎಂವಿ ಕಾಯ್ದೆ | ಶ್ರೀ ದಾದಾ ಫೀರ್ ಬಿನ್ ಮೆಹಬೂಬ್ ಪಾಷ, 32 ವರ್ಷ,ನಂ 272, 5ನೇ ಕ್ರಾಸ್, ವಿಜಯನಗರ, ವೈಟ್‌ಫೀಲ್ಡ್, ಬೆಂ.-66 | ಅಲ್ಲಾ ಬಕುಷ-20 ವರ್ಷ, ನಂ 272, 5ನೇ ಕ್ರಾಸ್, ವಿಜಯನಗರ, ವೈಟ್‌ಫೀಲ್ಡ್, ಬೆಂ.-66 | ಎ-1 ವಿರೇಶ ಬಿನ್ ಹಂಪಣ್ಣ, 33 ವರ್ಷ, ನಂ-55, ನಾರಾಯಣಪುರರೋಡ್, ನಲ್ಲೂರಹಳ್ಳಿ ಲೇಕ್ ಹತ್ತಿರ, ವೈಟ್‌ಫೀಲ್ಡ್.<br><br>ಎ-2 ಭರತ್ ಕೃಷ್ಣ.ಬಿ. ಬಿನ್ ಸಾಯಿಬಾಬಾ, 28 ವರ್ಷ, ಕೇರ್ ಉಮೇಶ್, ಸರ್ಕಾರಿ ಶಾಲೆಹತ್ತಿರ, ಕಾಟಂನಲ್ಲೂರುಕ್ರಾಸ್, ಹೊಸಕೋಟೆ. |
| 4 | ವೈಟ್‌ಫೀಲ್ಡ್ ಸಂ | 85/2020, ಕಲಂ 279, 283, 304(ಎ) ಐಪಿಸಿ | ಶ್ರೀ ರವಿ ರೆಡ್ಡಿ ಎಂ ಬಿನ್ ಮುನಿರೆಡ್ಡಿ, 33 | ಬಾಬುರೆಡ್ಡಿ 28 ವರ್ಷ, ಗೊಲ್ಲಹಳ್ಳಿ ಗ್ರಾಮ, | ಎ-1 ಬಾಬುರೆಡ್ಡಿ.ಎಂ., ಗೊಲ್ಲಹಳ್ಳಿ, ಬೊಮ್ಮಸಂದ್ರ |

| | | | | | |
|---|---|---|---|---|---|
| | | | ವರ್ಷ, ಗೊಲ್ಲಹಳ್ಳಿ ಗ್ರಾಮ, ಬೊಮ್ಮಸಂದ್ರ ಪೋಸ್ಟ್, ಆನೇಕಲ್ (ತಾ), ಬೆಂ.ಗ್ರಾಮಾಂತರಜಿಲ್ಲೆ. | ಬೊಮ್ಮಸಂದ್ರ ಪೋಸ್ಟ್, ಆನೇಕಲ್ (ತಾ), ಬೆಂ.ಗ್ರಾಮಾಂತರಜಿಲ್ಲೆ. | ಪೋಸ್ಟ್, ಆನೇಕಲ್ (ತಾ), ಬೆಂ.ಜಿಲ್ಲೆ.<br>ಎ–2 ನರಸಿಂಹರಾಜು ಜಿ.ಸಿ, 55 ವರ್ಷ, ಗಾಯತ್ರಿ ನಿಲಯ, 6ನೇ ಕ್ರಾಸ್, ಎಸ್‌ಐಟಿಎಕ್ಸ್‌ಟೇನ್ಷನ್, ಕುವೆಂಪುನಗರ, ಬೆಂ,ನಗರ. |
| 5 | ಯಶವಂತಪುರ | 73/2020<br>ಕಲಂ: 279, 304(ಎ) ಐ.ಪಿ.ಸಿ<br>20.07.2020 | ಕಾರ್ತಿಕ್ ಕಂದಗಲ್ ಬಿನ್ ಸುರೇಶ್ ಕಂದಗಲ್<br>22 ವರ್ಷ<br>ನಂ: 02/04, 3ನೇ ಮುಖ್ಯರಸ್ತೆ, 2ನೇ ಬ್ಲಾಕ್, ಗೋರಗುಂಟೆಪಾಳ್ಯ, ಬೆಂಗಳೂರು –22.<br>ಮೊ.ಸಂಖ್ಯೆ: 8867124429 | ಸುರೇಶ್ ಕಂದಗಲ್<br>22 ವರ್ಷ<br>ನಂ: 02/04, 3ನೇ ಮುಖ್ಯರಸ್ತೆ, 2ನೇ ಬ್ಲಾಕ್, ಗೋರಗುಂಟೆಪಾಳ್ಯ, ಬೆಂಗಳೂರು –22. | ಎನ್.ಜಿ.ಉಮೇಶ್ ಸಹಾಯಕ ಕಾರ್ಯಪಾಲಕ ಅಭಿಯಂತರರು ಗೊರಗೊಂಟೆಪಾಳ್ಯ ಉಪ–ವಿಭಾಗ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ. |
| 6 | ಪುಲಕೇಶಿನಗರ ಸಂಚಾರ | 06/2021 ಕಲಂ 279, 304(ಎ), 336, 283 ಐ.ಪಿ.ಸಿ ಮತ್ತು ಕಲಂ 56 ಸಹಿತ 192(ಎ) ಐ.ಎಂ.ವಿ ಆಕ್ಟ್<br>ದಿನಾಂಕ: 06/02/2021 | ಶ್ರೀ. ಸೈಯದ್ ಮುಸ್ತಾಕ್ ಅಹ್ಮದ್ ಬಿನ್ ಸೈಯದ್ ಮೆಹಬೂಬ್, 49 ವರ್ಷ, ವಾಸ ನಂ.32, 2ನೇ ಮೈನ್, ಕಾಲಾಚಂದ್ ಲೇಔಟ್, ಲಿಂಗರಾಜಪುರ, ಬೆಂಗಳೂರು–560084, ಮೊಬೈಲ್ 9902586527 | ಕು: ತಸ್‌ದೀಕ್ ಬುಷ್ರಾ ತಂದೆ ಸೈಯದ್ ಮುಸ್ತಾಕ್ ಅಹ್ಮದ್, 19 ವರ್ಷ, ವಾಸ ನಂ.32, 2ನೇ ಮೈನ್, ಕಾಲಾಚಂದ್ ಲೇಔಟ್, ಲಿಂಗರಾಜಪುರ, ಬೆಂಗಳೂರು–560084 | A-1 ಪಳನಿ ಬಿನ್ ಮುನಿಸ್ವಾಮಿ, 50 ವರ್ಷ, ವಾಸ ನಂ.93, ಕೆ.ಎಸ್ ಗಾರ್ಡನ್, ಲಾಲ್‌ಬಾಗ್ ರಸ್ತೆ, 1ನೇ ಕ್ರಾಸ್, ಬೆಂಗಳೂರು ದಕ್ಷಿಣ–560027, (ಸರ್ಕಾರಿ ಲಾರಿ ನಂ. KA-01-A-1278 ರ ಚಾಲಕ)<br>A-2 ಮಹಾದೇವ್ ಎಂ. 51 ವರ್ಷ, ಎಕ್ಸಿಕ್ಯೂಟಿವ್ ಇಂಜಿನಿಯರ್, ಸಾರಿಗೆ, ರೂಮ್ ನಂ.113, ಕೌನ್ಸಿಲ್ ಬಿಲ್ಡಿಂಗ್, ಬಿ.ಬಿ.ಎಂ.ಪಿ ಕಛೇರಿ, ಎನ್.ಆರ್ ಸರ್ಕಲ್, ಬೆಂಗಳೂರು 560002.(ಸರ್ಕಾರಿ ಲಾರಿ ನಂ. KA-01-A-1278 ರ ಹಾಲಿ ಮಾಲೀಕರಾಗಿರುತ್ತಾರೆ)<br>A-3 ಭೈರೇಗೌಡ, 46 ವರ್ಷ, ಎ.ಇ.ಇ, ಇ–1 ಸಬ್ ಡಿವಿಜನ್, ಬೆಸ್ಕಾಂ 2ನೇ ಸ್ಟೇಜ್, ಪಿಳ್ಳಣ್ಣ ಗಾರ್ಡನ್, ಬೆಂಗಳೂರು–560045<br>A-4 ಆದಿ ನಾರಾಯಣ, 46 |

| | | | | | |
|---|---|---|---|---|---|
| | | | | | ವರ್ಷ, ಎ..ಇ, ಇ-1 ಸಬ್ ಡಿವಿಜನ್, ಬೆಸ್ಕಾಂ 2ನೇ ಸ್ಟೇಜ್; ಪಿಳ್ಳಣ್ಣ ಗಾರ್ಡನ್, ಬೆಂಗಳೂರು-560045<br>A-5 ಮಧುಚಂದ್ರ ಕುಮಾರ್ ಬಿನ್ ಚಂದ್ರ, 29 ವರ್ಷ, ವಾಸ ಅಮೋಘ ಅಪಾರ್ಟ್‌ಮೆಂಟ್ ಹಿಂಭಾಗ, ದೊಡ್ಡಕಲ್ಲಸಂದ್ರ ಹುಳಿಮಾವು, ಬೆಂಗಳೂರು ನಗರ. 560076 |
| 7 | ವೈಟ್‌ಫೀಲ್ಡ್ ಸಂ | 31/2021, ಕಲಂ 279, 304(ಎ) ಐಪಿಸಿ, ಕಲಂ 134(ಎ) & (ಬಿ) ಸಹಿತ 187 ಐಎಂವಿ ಕಾಯ್ದೆ | ಶ್ರೀ ಕರುಣಾಕರನ್ ಪಿಳ್ಳೈ ಬಿನ್ ಚೆಲ್ಲಪ್ಪಕೂರುಪ್, 55 ವರ್ಷ, 1852/2, ಬೃಂದಾವನ 3ನೇ ಹಂತ, ವರ್ತೂರು, ಮಧುರ ನಗರ, ಬೆಂ.ನಗರ. | ಶ್ರೀಮತಿ ಶ್ರೀದೇವಿ .ಕೆ. ಪಿಳ್ಳೈ 51 ವರ್ಷ, 1852/2, ಬೃಂದಾವನ 3ನೇ ಹಂತ, ವರ್ತೂರು, ಮಧುರ ನಗರ, ಬೆಂ.ನಗರ. | ಎ-1 ಸಂಜಯ್ .ಬಿ. ಬಿನ್ ಭದ್ರಯ್ಯ, 22 ವರ್ಷ, ನಂ-25, ವಾಟರ್‌ಟ್ಯಾಂಕ್ ಹತ್ತಿರ,ಗೋಫ್‌ಸಂದ್ರ, ಮುತ್ತನಲ್ಲೂರು, ಸರ್ಜಾಪುರ, ಬೆಂ.ಗ್ರಾಮಾಂತರಜಿಲ್ಲೆ.<br>ಎ-2 ದಿವ್ಯಕೃಷ್ಣನ್ ಬಿನ್ ಕರುಣಾಕರನ್‌ಪಿಳ್ಳೈ, 21, 1852/2, ಬೃಂದಾವನ 3ನೇ ಹಂತ, ವರ್ತೂರು, ಮಧುರ ನಗರ, ಬೆಂ.ನಗರ.<br>ಎ-3 ಬಾಬು.ಎಂ. ಬಿನ್ ಬಾಷಾ ಸಾಹೇಬ್, 48 ವರ್ಷ, ನಂ-1256, 9 ನೇ ಕ್ರಾಸ್, ಆರ್.ಕೆ. ಹೆಗಡೆನಗರ, ಬೆಂ.ನಗರ.<br>ಎ-4 ಪ್ರಸಾದ್.ಎ.ಬಿನ್ ಲೇ॥ ಬಾಬುರಾವ್, 40 ವರ್ಷ, ನಂ-16, ಹಲಸಹಳ್ಳಿ ರಸ್ತೆ, ಕಾವೇರಿ ಲೇ ಔಟ್, ವರ್ತೂರು. |
| 8 | ಬಾಣಸವಾಡಿ | 101/2021 ಕಲಂ 279, 336, 283, 304(ಎ) ಐಪಿಸಿ 134(ಎ &ಬಿ) ಸಹಿತ 187 ಐಎಂವಿ ಅಕ್ಟ್ | ಶ್ರೀ.ಮದುಪ್ರಸಾದ್ ಬಿನ್ ಈರೇಗೌಡ 35 ವರ್ಷ, ಲಕ್ಷ್ಮೀ ವೆಂಕಟೇಶ್ವರ ಸ್ಟೋನ್ಸ್ & ಗ್ರಾನೇಟ್ ಅಂಗಡಿ, ಥಣಿಸಂದ್ರ ಮೈನ್ ರೋಡ್, ಬೆಂಗಳೂರು. | ಶ್ರೀ.ಅಜೀಂ ಅಹ್ಮದ್ ಬಿನ್ ಲೇ// ಅಬ್ದುಲ್ ಜಾವೀದ್ 21 ವರ್ಷ, ನಂ.22, ಮಾರುತಿ ನಗರ, ಚಿಕ್ಕಬಾಣವಾರ ಹೆಸರಘಟ್ಟ ಮೈನ್ ರೋಡ್, ಬೆಂಗಳೂರು. (ಸ್ಕೂಟರ್ ನಂ.ಕೆಎ.04.ಜೆಜಡ್.6337) | ಎ1. ಸಪೀತಾ.ಪಿ ಥಣಿಸಂದ್ರ ಮೈನ್ ರೋಡ್ ಬಿಬಿಎಂಪಿ ಉಸ್ತವಾರಿ ಅಧಿಕಾರಿ.<br>ಎ2, 407 ಟೆಂಪೋ ನಂ.ಕೆಎ.14.8378ರ ಚಾಲಕ ರವಿ ಲೇ ರಾಮಸ್ವಾಮಿ 31 ವರ್ಷ,<br>ಎ3, ಬಾಲಸುಬ್ರಮಣಿ ಬಿನ್ ಅಪುಗುಪ್ತಾನ್ 50 ವರ್ಷ |

| | | | | | |
|---|---|---|---|---|---|
| | | | | | ಎನ್‌ಸಿಸಿ ಗುತ್ತಿಗೆ ಕಂಪನಿ ಮ್ಯಾನಜರ್ |
| 9 | ಕಾಮಾಕ್ಷಿಪಾಳ್ಯ | 104/2021 ಕಲಂ–279, 304(ಎ) ಐ.ಪಿ.ಸಿ ದಿನಾಂಕ–06–09–2021<br><br>ಬಿ.ಡಬ್ಲ್ಯೂಎಸ್‌ಎಸ್‌ಬಿ ರವರು ಕಾಮಗಾರಿಗಾಗಿ ರಸ್ತೆಯಲ್ಲಿ ತೋಡಿರುವ ಗುಂಡಿಯಿಂದ | ಮೊಹಮದ್ ಜುಬೇರ್ ಬಿನ್ ಅಬ್ದುಲ್ ರಹೀಮ್, 27ವರ್ಷ, ಸೌತ್‌ಈಸ್ಟ್ ಏಷಿಯನ್ ಕಾಲೇಜ್ ಆಫ್ ನರ್ಸಿಂಗ್ ಹಾಸ್ಟೆಲ್, ಇಕ್ತಾನಗರ, ಬಸವನಪುರ, ಕೆ.ಆರ್.ಪುರಂ, ಬೆಂಗಳೂರು ಮೊಸಂಖ್ಯೆ: 9050559313 | ಖುರ್ಷಿದ್ ಬಿನ್ ಲೇಟ್ ಸುಲೇಮಾನ್, 65 ವರ್ಷ, ಮನ್ಸೂರ್ ಪಟ್ಟಿಗ್ರಾಮ, ಜುಮ್ಮಾ ಮಸೀದಿ ಹತ್ತಿರ, ಮೇವತ್ ಜಿಲ್ಲೆ, ಹರಿಯಾಣ ರಾಜ್ಯ | ಕುಮಾರ್‌ನಾಯಕ್ ಎಲ್ ಚೀಫ್ ಇಂಜಿನೀಯರ್, ಬಿ.ಡಬ್ಲ್ಯೂ.ಎಸ್.ಎಸ್.ಬಿ ವೆಸ್ಟ್ ಜೋನ್, ಬೆಂಗಳೂರು |
| 10 | ಪೀಣ್ಯಾ | 125/2021 ಕಲಂ.279, 304(ಎ) ಐಪಿಸಿ ದಿ:17.09.2021 ರಂದು ರಾತ್ರಿ 23.30<br><br>ಬಿ.ಡಬ್ಲ್ಯೂಎಸ್‌ಎಸ್‌ಬಿ ರವರು ಕಾಮಗಾರಿಗಾಗಿ ರಸ್ತೆಯಲ್ಲಿ ತೋಡಿರುವ ಗುಂಡಿಯಿಂದ | ಶ್ರೀಮತಿ ಭಾರತಿ ಟಿ.ಆರ್. ಕೋಂ ಲೇಟ್ ಆನಂದಪ್ಪ, 41ವರ್ಷ, 8ನೇ ಅಡ್ಡರಸ್ತೆ, 3ನೇ ಮುಖ್ಯರಸ್ತೆ, ಸರ್ಕಾರಿ ಆಸ್ಪತ್ರೆಯ ಹತ್ತಿರ, ಮಲ್ಲಸಂದ್ರ, ಬೆಂಗಳೂರು  57 ಮೊ.ಸಂಖ್ಯೆ: 9740806996 | ಆನಂದಪ್ಪ, 47ವರ್ಷ, 8ನೇ ಅಡ್ಡರಸ್ತೆ, 3ನೇ ಮುಖ್ಯರಸ್ತೆ, ಸರ್ಕಾರಿ ಆಸ್ಪತ್ರೆಯ ಹತ್ತಿರ, ಮಲ್ಲಸಂದ್ರ, ಬೆಂಗಳೂರು  57 | ಬಿ.ಡಬ್ಲ್ಯೂಎಸ್‌ಎಸ್‌ಬಿ ರವರ ಕಾಮಗಾರಿಗಾಗಿ ಟೆಂಡರ್ ಪಡೆದ ಮೇಘಾ ಇಂಜಿನೀಯರಿಂಗ್ & ಇನ್ಫ್ರಾಸ್ಟ್ರಕ್ಚರ್ ಲಿ ಕಂಪನಿ, ನಂಬರ್ 02 ಟೆಕ್ನಾ ಕ್ರಾಫ್ಟ್ ಇಂಡಸ್ಟ್ರಿಯಲ್ ಎಸ್ಟೇಟ್, ಬಾಲಾ ನಗರ್ ಹೈದ್ರಾಬಾದ್. |
| 11 | ಆರ್.ಟಿ ನಗರ ಸಂಚಾರ | 81/2021 ಕಲಂ–279,337,304(ಎ) ಐಪಿಸಿ ದಿನಾಂಕ–02/12/2021 ರಂದು ಬೆಳಿಗ್ಗೆ 2–00 ಗಂಟೆ | ಶ್ರೀ ನರೇಶ್ ಕುಮಾರ್ ಹೆಚ್ ಬಿನ್ ಮುನಿರತ್ನ, 29 ವರ್ಷ, ವಾಸ–ನಂ–1000, ಕಬೀರ್ ಆಶ್ರಮದ ಹತ್ತಿರ, ಬಿಇಎಲ್ ನಾರ್ತ್ ಗೇಟ್, ದೊಡ್ಡಬೊಮ್ಮಸಂದ್ರ, ಬೆಂಗಳೂರು | ಶ್ರೀ ಮಂಜುನಾಥ ಎಲ್.ಎ ಬಿನ್ ಅಶ್ವಥಪ್ಪ, 28 ವರ್ಷ, ವಾಸ– ನಂ–19/16, ಲೊಟ್ಟೆಗೊಲ್ಲಹಳ್ಳಿ, ಜಲಗೇರಮ್ಮ ಟೆಂಪಲ್ ಹತ್ತಿರ, ಆರ್.ಎಂ.ವಿ 2ನೇ ಹಂತ, ಬೆಂಗಳೂರು | ಶ್ರೀ ಮಂಜುನಾಥ ಎಲ್.ಎ ಬಿನ್ ಅಶ್ವಥಪ್ಪ, 28 ವರ್ಷ, ವಾಸ– ನಂ–19/16, ಲೊಟ್ಟೆಗೊಲ್ಲಹಳ್ಳಿ, ಜಲಗೇರಮ್ಮ ಟೆಂಪಲ್ ಹತ್ತಿರ, ಆರ್.ಎಂ.ವಿ 2ನೇ ಹಂತ, ಬೆಂಗಳೂರು |
| 12 | ಯಲಹಂಕ ಸಂಚಾರ | 175/2021 ಕಲಂ.279, 304(ಎ) ಐಪಿಸಿ ದಿನಾಂಕ:13.10.2021 | ಸಂತೋಷ ಕುಮಾರ ಬಿನ್ ಪಾಪಣ್ಣ, 36 ವರ್ಷ, ವಾಸ ನಂ.107/1, 2ನೇ ಮೈನ್, 7ನೇ ಕ್ರಾಸ್, ಮಾರುತಿ ನಗರ, ಯಲಹಂಕ, ಬೆಂಗಳೂರು ನಗರ–560064 | ಗಾಯತ್ರಿ ಕೋಂ ರಾಜಾ 37 ವರ್ಷ, ವಾಸ ನಂ.46, ಕೆರೆಕೋಡಿ ರಸ್ತೆ, ಚೌಡೇಶ್ವರಿ ಕಲ್ಯಾಣ ಮಂಟಪದ ಬಳಿ, ಡೌನ್ ಬಜಾರ್, ಯಲಹಂಕ, ಬೆಂಗಳೂರು ನಗರ–560064 | ಗಾಯತ್ರಿ ಕೋಂ ರಾಜಾ 37 ವರ್ಷ, ವಾಸ ನಂ.46, ಕೆರೆಕೋಡಿ ರಸ್ತೆ, ಚೌಡೇಶ್ವರಿ ಕಲ್ಯಾಣ ಮಂಟಪದ ಬಳಿ, ಡೌನ್ ಬಜಾರ್, ಯಲಹಂಕ, ಬೆಂಗಳೂರು ನಗರ–560064 (ಸ್ವಯಂ ಅಪಘಾತದಿಂದ ಮೃತ ಪಟ್ಟಿರುತ್ತಾರೆ.) |

ಅನುಬಂಧ -5

## ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

1). ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ.ಸಲೀಂ ಅಹಮದ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಮತ್ತು
2). ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ.ಯು.ಬಿ.ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು) ರವರ ಪ್ರಶ್ನೆ ಸಂಖ್ಯೆ:253+202 ಕ್ಕೆ ಉತ್ತರಗಳು

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿನ ರಸ್ತೆಗಳಲ್ಲಿ ಗುಂಡಿ ಮುಚ್ಚಲು 2017–18ನೇ ಸಾಲಿನಿಂದ 2021–22 ರವರೆಗೆ ಖರ್ಚು ಮಾಡಿರುವ ಮೊತ್ತದ ವಿವರಗಳು.

ಅನುಬಂಧ-5

| ಕ್ರ.ಸಂ | ವಲಯ / ವಿಭಾಗ | 2017-18 | 2018-19 | 2019-20 | 2020-21 | 2021-22 | ಷರಾ |
|---|---|---|---|---|---|---|---|
| 01 | 02 | 03 | 04 | 05 | 06 | 07 | 08 |
| 1 | ಪೂರ್ವ ವಲಯ | 910.00 | 866.00 | 865.00 | 0.00 | 910.00 | |
| 2 | ಪಶ್ಚಿಮ ವಲಯ | 734.00 | 830.00 | 773.50 | 490.00 | 750.00 | |
| 3 | ದಕ್ಷಿಣ ವಲಯ | 982.00 | 1036.00 | 988.00 | 0.00 | 1160.00 | |
| 4 | ಬೊಮ್ಮನಹಳ್ಳಿ ವಲಯ | 405.00 | 415.00 | 445.00 | 0.00 | 320.00 | |
| 5 | ದಾಸರಹಳ್ಳಿ | 85.00 | 0.00 | 310.00 | 0.00 | 160.00 | |
| 6 | ಮಹದೇವಪುರ ವಲಯ | 259.00 | 277.50 | 337.00 | 104.00 | 335.00 | |
| 7 | ರಾಜರಾಜೇಶ್ವರಿ ನಗರ ವಲಲಯ | 140.72 | 134.25 | 182.97 | 146.81 | 223.01 | |
| 8 | ಯಲಹಂಕ ವಲಯ | 240.00 | 185.00 | 310.00 | 0.00 | 220.00 | |
| 9 | ರಸ್ತೆ ಮೂಲಭೂತ ಸೌಕರ್ಯ | 1025.71 | 1174.30 | 1270.13 | 895.34 | 630.00 | |
| ಒಟ್ಟು | | 4781.43 | 4918.05 | 5481.60 | 1636.15 | 4708.01 | |

## ಅನುಬಂಧ-6

## ರಸ್ತೆಗಳನ್ನು ಸುಸ್ಥಿತಿಯಲ್ಲಿಡಲು ಪಾಲಿಕೆ ವತಿಯಿಂದ ಕೈಗೊಳ್ಳಲಾಗಿರುವ ಕ್ರಮಗಳು.

- ಅನಧಿಕೃತವಾಗಿ / ಅನುಮತಿಯ ಷರತ್ತುಗಳನ್ನು ಉಲ್ಲಂಘಿಸಿ, ರಸ್ತೆಯನ್ನು ಅಗೆದು ಗುಂಡಿಯನ್ನು ಮಾಡುತ್ತಿರುವ ಹಲವಾರು ಖಾಸಗಿ ಓ.ಎಫ್.ಸಿ ಸಂಸ್ಥೆಗಳ ವಿರುದ್ಧ ಎಫ್.ಐ.ಆರ್ ದಾಖಲಿಸಿ, ದಂಡವನ್ನು ವಿಧಿಸಲಾಗುತ್ತಿದ್ದು, 2015-16 ರಿಂದ ಇಲ್ಲಿಯವರೆಗೂ ವಿವಿಧ ಖಾಸಗಿ ಓ.ಎಫ್.ಸಿ ಸಂಸ್ಥೆಗಳಿಂದ ರೂ.4012.70 ಲಕ್ಷಗಳ (ರೂ.40.127 ಕೋಟಿಗಳು) ದಂಡವನ್ನು ಈಗಾಗಲೇ ವಸೂಲು ಮಾಡಲಾಗಿರುತ್ತದೆ.
- ಬಿಬಿಎಂಪಿ ವ್ಯಾಪ್ತಿಯಲ್ಲಿ ಕ್ರಮಬದ್ಧವಾಗಿ ರಸ್ತೆ ಅಗೆಯದ ವಿವಿಧ ಸರ್ಕಾರಿ ಅಂಗ ಸಂಸ್ಥೆಗಳ ವಿರುದ್ಧ ಎಫ್.ಐ.ಆರ್ ದಾಖಲಿಸಲು ಪೋಲೀಸ್ ಇಲಾಖೆಗೆ ಪಾಲಿಕೆಯಿಂದ ಪತ್ರ ಬರೆಯಲಾಗಿದ್ದು, ನಗರ ಪೋಲೀಸ್ ಆಯುಕ್ತರ ಕಛೇರಿಯಿಂದ ಎಲ್ಲಾ ಪೋಲೀಸ್ ಠಾಣೆಗೆ ಸುತ್ತೋಲೆ ಹೊರಡಿಸಿ, ಕ್ರಮಬದ್ಧವಾಗಿ ರಸ್ತೆ ಅಗೆಯದ ಸರ್ಕಾರಿ ಅಂಗ ಸಂಸ್ಥೆಗಳ ವಿರುದ್ಧ ಪಾಲಿಕೆಯ ಅಭಿಯಂತರರು ಸಲ್ಲಿಸುವ ದೂರುಗಳ ಆಧಾರದಲ್ಲಿ ಎಫ್.ಐ.ಆರ್. ದಾಖಲಿಸಲು ಕ್ರಮಕೈಗೊಳ್ಳುವಂತೆ ಸೂಚನೆ ನೀಡಲಾಗಿರುತ್ತದೆ.
- ನಿಗಧಿತ ಕಾಲಮಿತಿಯೊಳಗೆ ರಸ್ತೆ ಅಗೆತವನ್ನು ಪೂರ್ಣಗೊಳಿಸದ ಸರ್ಕಾರಿ ಅಂಗ ಸಂಸ್ಥೆಗಳು ಪಾವತಿಸಿರುವ ಶುಲ್ಕವನ್ನು ಮುಟ್ಟುಗೋಲು ಹಾಕಿಕೊಳ್ಳುವ ಕ್ರಮವನ್ನು ಜಾರಿಗೆ ತರಲು ಕ್ರಮ ಕೈಗೊಳ್ಳಲಾಗಿರುತ್ತದೆ.
- ಪಾಲಿಕೆ ವ್ಯಾಪ್ತಿಯಲ್ಲಿನ ಆರ್ಟೀರಿಯಲ್ ಮತ್ತು ಸಬ್-ಆರ್ಟೀರಿಯಲ್ ರಸ್ತೆಗಳಲ್ಲಿ ಉಂಟಾಗುವ ರಸ್ತೆಗುಂಡಿ ಮತ್ತು ಹಾಳಾದ ರಸ್ತೆ ಮೇಲ್ಮೈಯ ದುರಸ್ತಿಯನ್ನು ಪಾಲಿಕೆ ವತಿಯಿಂದ ಸ್ಥಾಪಿಸಲಾಗಿರುವ ಆಸ್‌ಪಾಲ್ಟ್ ಬ್ಯಾಚ್‌ಮಿಕ್ಸ್ ಪ್ಲಾಂಟ್‌ನ ಕಾರ್ಯಾಚರಣೆ ಮತ್ತು ನಿರ್ವಹಣೆಯನ್ನು ಗುತ್ತಿಗೆದಾರರಾದ ಮೆ॥ ಜೆ.ಎಂ.ಸಿ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್‌ರವರಿಗೆ ಟೆಂಡರ್ ಆಧಾರದಲ್ಲಿ ಗುತ್ತಿಗೆಗೆ ನೀಡಿದ್ದು, ಸದರಿಯವರಿಂದ ರಸ್ತೆಗುಂಡಿ ದುರಸ್ಥಿ ಕಾಮಗಾರಿಯನ್ನು ಕೈಗೊಳ್ಳಲಾಗುತ್ತಿರುತ್ತದೆ.
- ಪಾಲಿಕೆಯ 198 ವಾರ್ಡ್‌ಗಳ ವ್ಯಾಪ್ತಿಯ ವಾರ್ಡ್ ಮಟ್ಟದ ರಸ್ತೆಗಳ ದುರಸ್ಥಿಯನ್ನು ಟೆಂಡರ್ ಮುಖೇನ ನಿಯೋಜಿಸಿಕೊಂಡಿರುವ ಗುತ್ತಿಗೆದಾರರ ಮುಖಾಂತರ ರಸ್ತೆಗುಂಡಿ ಮತ್ತು ಹಾಳಾದ ರಸ್ತೆ ಮೇಲ್ಮೈಯನ್ನು ದುರಸ್ತಿಪಡಿಸಲಾಗುತ್ತಿರುತ್ತದೆ.
- ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು 110 ಹಳ್ಳಿಗಳ ಯೋಜನೆಯಡಿ ನೀರು ಸರಬರಾಜು ಮತ್ತು ಒಳಚರಂಡಿ ಕೊಳವೆ ಅಳವಡಿಸಲು ರಸ್ತೆ ಕತ್ತರಿಸಿರುವ ಭಾಗಗಳ ಪುನಃಶ್ಚೇತನ / ಅಭಿವೃದ್ಧಿಗೆ 2020-21ನೇ ಸಾಲಿನಲ್ಲಿ ಸರ್ಕಾರದ ಆದೇಶ ಸಂಖ್ಯೆ: ನಅಇ 06 ಎಂಎನ್‌ವೈ 2021, ದಿನಾಂಕ: 29.04.2021 ರಲ್ಲಿ ರೂ.1000.00 ಕೋಟಿಗಳ ಮೊತ್ತದ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಗೆ ಅನುಮೋದನೆ ನೀಡಿದ್ದು, ಪ್ರಸ್ತುತ ಸದರಿ ಕಾಮಗಾರಿಗಳ ಅನುಷ್ಠಾನಕ್ಕೆ ಟೆಂಡರ್ ಪ್ರಕ್ರಿಯೆಯು ವಿವಿಧ ಹಂತದಲ್ಲಿದ್ದು, ಕೆಲವೊಂದು ಕಾಮಗಾರಿಗಳನ್ನು ಪ್ರಾರಂಭಿಸಲಾಗಿರುತ್ತದೆ.
- ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯ ರಸ್ತೆಗಳಲ್ಲಿ ಅನುಸಾಧನ ಅಳವಡಿಸಲು / ದುರಸ್ಥಿಪಡಿಸಲು ಅನಧಿಕೃತವಾಗಿ ರಸ್ತೆ ಕತ್ತರಿಸಿರುವ / ಕತ್ತರಿಸುತ್ತಿರುವ ಪ್ರಕರಣಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ: ನಅಇ 210 ಎಂಎನ್‌ವೈ 2017, ದಿನಾಂಕ: 10.12.2018ರನ್ವಯ ಪಾಲಿಕೆ ವತಿಯಿಂದ ದಂಡ ವಿಧಿಸಲು ಮತ್ತು ಪೋಲೀಸ್ ಠಾಣೆಯಲ್ಲಿ ದೂರು ದಾಖಲಿಸಲು ಕ್ರಮ ಕೈಗೊಳ್ಳಲಾಗುತ್ತಿರುತ್ತದೆ.
- ಇದಲ್ಲದೇ, ಹಾಲಿ ಪ್ರಗತಿಯಲ್ಲಿರುವ ರಸ್ತೆ ಅಭಿವೃದ್ಧಿ ಕಾಮಗಾರಿಗಳ ಅಡಿಯಲ್ಲಿ ಮಾರ್ಚ್-2022ರ ಮಾಹೆಯ ಅಂತ್ಯಕ್ಕೆ ಸುಮಾರು 180 ಕಿ.ಮೀ ಉದ್ದದ ಆರ್ಟೀರಿಯಲ್ ಮತ್ತು ಸಬ್-ಆರ್ಟೀರಿಯಲ್ ರಸ್ತೆಗಳ ಡಾಂಬರೀಕರಣವನ್ನು ಪೂರ್ಣಗೊಳಿಸಲು ಕ್ರಮಕೈಗೊಳ್ಳಲಾಗಿರುತ್ತದೆ.

. . .2/

- ಪಾಲಿಕೆ ವತಿಯಿಂದ ಅನುಷ್ಠಾನಗೊಳಿಸುತ್ತಿರುವ ಡಾಂಬರೀಕರಣದ ರಸ್ತೆಗಳ ನಿರ್ಮಾಣವನ್ನು ಐ.ಆರ್.ಸಿ-37, ವೈಟ್‌ಟಾಪಿಂಗ್ ರಸ್ತೆ ನಿರ್ಮಾಣವನ್ನು ಐ.ಆರ್.ಸಿ.ಎಸ್.ಪಿ-76, ಮತ್ತು ಡಾಂಬರೀಕರಣ ರಸ್ತೆಗಳ ನಿರ್ವಹಣೆಗೆ ಐ.ಆರ್.ಸಿ-82 ಗಳನ್ನು ಬಳಸಿಕೊಂಡು ರಸ್ತೆಗಳ ನಿರ್ಮಾಣ ಮತ್ತು ನಿರ್ವಹಣೆಯ ತಾಂತ್ರಿಕತೆಯನ್ನು ಇಂಡಿಯನ್ ರೋಡ್ ಕಾಂಗ್ರೆಸ್‌ನ (ಐ.ಆರ್.ಸಿ) ನಿಯಮಗಳು ಹಾಗೂ **MoRT&H** ವಿಶಿಷ್ಠ ವಿವರಣೆಗಳನ್ನು ಪಾಲಿಸಲು ಅನುಕೂಲವಾಗುವಂತೆ ರೂ.1.00 ಕೋಟಿ ಮೇಲ್ಪಟ್ಟ ಎಲ್ಲಾ ಯೋಜನೆ / ಕಾಮಗಾರಿಗಳಿಗೆ ಯೋಜನಾ ಸಮಾಲೋಚಕರನ್ನು ನಿಯೋಜಿಸಿಕೊಂಡು ವಿಸ್ತೃತ ಯೋಜನಾ ವರದಿ **(DPR)** ತಯಾರಿಸಿಕೊಂಡು ಟೆಂಡರ್ ಮುಖಾಂತರ ನುರಿತ ಯೋಜನಾ ಸಮಾಲೋಚಕರನ್ನು ನಿಯೋಜಿಸಿಕೊಂಡು ರಸ್ತೆ ನಿರ್ಮಾಣ ಮತ್ತು ನಿರ್ವಹಣಾ ಕಾಮಗಾರಿಗಳನ್ನು ದೈನಂದಿನ ಮೇಲ್ವಿಚಾರಣೆಯಲ್ಲಿ ಇಂಡಿಯನ್ ರೋಡ್ ಕಾಂಗ್ರೆಸ್‌ನ ನಿಯಮ ಹಾಗೂ **MoRT&H** ವಿಶಿಷ್ಠ ವಿವರಣೆಗಳಂತೆ ಅನುಷ್ಠಾನಗೊಳಿಸಲು ಕ್ರಮವಹಿಸಲಾಗುತ್ತಿರುತ್ತದೆ.
- ಇದರ ಜೊತೆಗೆ ಎಲ್ಲಾ ಅಭಿಯಂತರರುಗಳಿಗೆ **Guidelines for Construction and Maintenance of Bangalore City Roads** ಎಂಬ ಕೈಪಿಡಿಯನ್ನು **(Hand Book)** ಒದಗಿಸಲಾಗಿದ್ದು, ಪಾಲಿಕೆ ವತಿಯಿಂದ ಕೈಗೊಳ್ಳುವ ಕಾಮಗಾರಿಗಳ ಗುಣಮಟ್ಟವನ್ನು ಕಾಯ್ದುಕೊಳ್ಳಲು ಕ್ರಮಕೈಗೊಳ್ಳಲಾಗಿರುತ್ತದೆ.
- ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವತಿಯಿಂದ ವಿವಿಧ ಇಲಾಖೆ / ಸಂಸ್ಥೆಗಳೊಂದಿಗೆ ಸಮನ್ವಯ ಸಾಧಿಸಲು ಪಾಲಿಕೆಯ ವತಿಯಿಂದ **Multi-Agency Road Cutting Co-ordination System (MARCCS)** ಆನ್‌ಲೈನ್ ವೇದಿಕೆ ಮುಖಾಂತರ ರಸ್ತೆ ಕತ್ತರಿಸುವ ಅನುಮತಿ ನೀಡುವ ಪ್ರಕ್ರಿಯೆ ಜಾರಿಗೊಳಿಸಲಾಗಿದೆ. ಇದರಿಂದ ಪ್ರತಿ ಹಂತದ ಮಾಹಿತಿ ಮತ್ತು ಪ್ರಕ್ರಿಯೆಯು ಪಾಲಿಕೆ ವ್ಯಾಪ್ತಿಯ ಸಂಬಂಧಪಟ್ಟ ಇಲಾಖೆ / ಸಂಸ್ಥೆಗಳಿಗೆ ತಕ್ಷಣವೇ ಲಭ್ಯವಾಗುತ್ತಿರುತ್ತದೆ.
- ಪಾಲಿಕೆಯ ಕಾರ್ಯಪಾಲಕ ಅಭಿಯಂತರರು / ಸಹಾಯಕ ಕಾರ್ಯಪಾಲಕ ಅಭಿಯಂತರರು / ಸಹಾಯಕ ಅಭಿಯಂತರರುಗಳ ಹಂತದಲ್ಲಿ ಸಂಬಂಧಪಟ್ಟ ಎಲ್ಲಾ ಇಲಾಖೆ / ಸಂಸ್ಥೆಗಳ ಅಧಿಕಾರಿ / ಅಭಿಯಂತರರನ್ನು ಒಳಗೊಂಡ **"Whats App Group"** ಅನ್ನು ರಚಿಸಿಕೊಂಡು ಸಮನ್ವಯ ಸಾಧಿಸಲು ಕ್ರಮ ವಹಿಸಲಾಗಿರುತ್ತದೆ.

*****